**One of the Inscriptions**
**IN THE**

# KUKANUR MALLIKARJUNA TEMPLE

**of the time of Kalachuri Sovideva**

**(A. D. 1170, October 23rd Friday)**

EDITED BY

NA-BHA (N. B. SHASTRI)

**NIZAM KARNATAK HISTORICAL RESEARCH SOCIETY**

**Fort, KOPBAL**

**1934**

ಗೆಳೆಯರ ಗುಂಪಿನ ಇತಿಹಾಸ ಶಾಖೆಯ ಪ್ರಥಮ ಸುಮನ

# ಕುಕನೂರು ಮಲ್ಲಿಕಾರ್ಜುನ ದೇವಾಲಯದಲ್ಲಿಯದೊಂದು ಶಾಸನ

ನಾ. ಭಾ.

ಕೊಪ್ಪಳ

# ಕುಕನೂರು ಮಲ್ಲಿಕಾರ್ಜುನ ದೇವಾಲಯದಲ್ಲಿಯದೊಂದು ಶಾಸನ

'ನಿಜಾಂ ಕರ್ನಾಟಕ ಇತಿಹಾಸ ಸಂಶೋಧಕ ಸಮಿತಿ'ಯವರ ಸಂಗ್ರಹದಿಂದ

ಕೊಪ್ಪಳ.

---

**ಶಾಸನಕಾಲ, ಕ್ರಿ. ವ. ೧೧೭೦ ಅಕ್ಟೋಬರ ೨೩ನೆಯ ಶುಕ್ರವಾರ ; ಶಾಸನ ಕವಿ ಶಿವದೇವ.**

**ಎತ್ತರ ೫ ಅಡಿ, ಅಗಲ ೨೦ ಇಂಚು, ಒಟ್ಟು ಸಾಲು ೭೮.**

ಸವತ್ಸ ಗೋವು. ಲಿಂಗ. ಭಕ್ತ.

೧. * ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ । ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ ॥ ಜಯತ್ಯಾ ವಿ

೨. ಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ನವಂ ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾನ್ತ ಭುವನಂ ವಪುಃ । ಸ್ವಸ್ತಿ ಶ್ರೀಮತ್ಪ್ರತಾಪ ಪ್ರ

೩. ಬಳ ಕಳಚುರಿಕ್ಷ್ಮಾಪ ವಂಶ್ಯಂ ಮದಾಂಧಾರಿ ಸ್ತೋಮಾಂಬೋಧಿ ಕುಂಭೋದ್ಭವನುದಿತ ಜಯಶ್ರೀ ವಧೂವಲ್ಲಭಂ ಲೋಕಸ್ತುತ್ಯಂ ಚಕ್ರ

೪. ವರ್ತ್ತಿ ಪ್ರಥಿತ ಗುಣಗಣಾವಾಸ ನುರ್ವ್ವೀಶಮಸ್ತನ್ಯಸ್ತಾಂಘ್ರಿ ದ್ವಂದ್ವ ನೇಂ ರಾಜಿಸಿದನೊ ಜಗದೊಳು [1]ಸೋವಿದೇವಾವನೀಶಂ ॥ ದೊರೆವೆತ್ತ ತದನ್ವ

೫. ಯ ವೀಶ್ವರಾಂಶವೆಂಬುದು ಸುವರ್ಣ್ನ ವೃಷಭ[ಧ್ವ]ಜದಿಂ ವರ ಡಮ [ರುಕ ತೂ]ರ್ಯ್ಯದಿನೊಪ್ಪಿರೆ ಕಳಚುರಿ ಭೂಪರದಱಿಕೊಳೆನೆ[ಬ]ರು

೬. ವೆಸೆಯ[ಲು] ಒಗೆದ[ಂ] ತತ್ಕುಲದೊಳ್ ಜಸವೊಗೆದಿರೆ ತತ್ಕುಲದೊಳ ಸಮಬಳನಸಗಂ ವೈರಿಗಳ ರಣತಲೆಯೊಳು ಪಿಡಿದೊಗೆದು ನಿಜಾ[ಂ]

೭. ಕದಸಗವೆಸ[ನೆ]ಸೆವಿ[ನೆ]ಗಂ ॥ ತತು ಪುತ್ರಂ ನೆಗಳ್ದಂ ನಿಜಾರಿ ಬಳವೊನ್ದಲು ಬನ್ನಮಂ ಕಂನಮಂ ತತು ಪುತ್ರಂ ನೆಗಳ್ದಂ ನಿಜಾರಿತಳೆ[ಯ]

---

ಈ ಶಾಸನದ ಪಾಠವನ್ನು ಶ್ರೀ ತಿ. ತಾ. ಶರ್ಮರವರು ನಾವು ಕಳಿಸಿದ ಮಸಿ ಪ್ರತಿಯ ಸಹಾಯದಿಂದ ಪರಿಷ್ಕರಿಸಿ ಕೆಲವು ಅಡಿ ಟಿಪ್ಪಣಿಗಳನ್ನು ಸೇರಿಸಿಕೊಟ್ಟದ್ದಕ್ಕಾಗಿ ವಂದನೆಗಳು.—ನಾ. ಭಾ.

* ಪಾದದ ಆರಂಭದಲ್ಲಿ ಪುಷ್ಪದ ಒಂದು ರೇಖಾ ಚಿತ್ರವಿದೆ. ಶಾಸನಗಳಲ್ಲಿ ಇದು ಸಾಮಾನ್ಯವಾಗಿ ಕಂಡುಬರುವ ಓಂ ಎಂಬುದರ ಸಂಕೇತ.

1 ಈ ಕಾಲದ ಶಾಸನಗಳಲ್ಲಿ ವ್ಯಂಜನಾಂತ ಶಬ್ದಗಳು ಇಲ್ಲ; ಸಾಮಾನ್ಯವಾಗಿ ಸ್ವರದಲ್ಲೇ ಅಂತ್ಯವಾಗುತ್ತವೆ. ಮಾತ್ರಾಧಿಕ್ಯವಾದರೂ ಲೇಖಕರು ಸ್ವರವನ್ನು ಸೇರಿಸಲು ಹಿಂಜರಿಯುವುದಿಲ್ಲ.

೮. ಲು ಹೃದ್ರೋಗಮಂ ಜೋಗಮಂ ತತು ಪುತ್ರಂ ನೆಗಳ್ದಂ ನಿಜಾರಿ ಬಳಮಂ ಪೆಣ್ಮಾಡಿ ಪೆರ್ಮಾಡಿ ತತ್ಸತುಪುತ್ರಂ ನೆಗಳ್ದಂ ನಿಜಾರಿ ಶಿಖಿಮಾ

೯. ಳೋದ್ಯಜ್ಜ್ವಲಾ ಬಜ್ಜ್ವಲಂ ॥ ತಂನಂದನಂ ಪ್ರತಾಪ ಮರುಂನಂದನ ನಮಳ ಸೂಸ್ರತೋಂನತಗುಣ ಭಾಸ್ವ[ಂ]ನಂದನನು[ರುಖಚರ] ಸರಿಂ ನಂದನನೆನಿ

೧೦. ಸಿ ಸೋಿದೇವಂ ನೆಗಳ್ದಂ ॥ ಮಲೆ*[1]ವದಟರ್ಕ್ಕಡಂಗುವ ಮಹೀಪತಿ ಗಳು*[2] ಸರಣೆಂನದಿರ್ದ್ದ ಮಂಡಲಿಕರಡಂಗದಾಟವಿಕರೊರ್ವ್ವರು ವಿಲ್ಲೆನೆ ಕೂ

೧೧. ಡೆ ಧಾರಿಣೀವಳಯಮನಾಳ್ದ ತಂನೆಸೆವ ರಾಯಮುರಾರಿವೆಸರು ಪೊದಳ್ಕೆಯಿಂ ನೆಲೆಗೊಳೆ ಸೋವಿದೇವ ಪ್ರಿಥಿವೀಪತಿ ವಿಕ್ರಮಮಂ ನಿಮಿರ್ಚ್ಚಿದಂ ॥ ಅನ್ತೆನಿಸಿ

೧೨. ಸ್ವಸ್ತಿ ಸಮಸ್ತ ಭುವನಾಶ್ರಯ[ಂ] ಶ್ರೀ ಪೃಥ್ವೀವಲ್ಲಭ[ಂ] ಮಹಾ ರಾಜಾಧಿರಾಜ ಪರಮೇಶ್ವರ ಕಾಳಾಂಜರ ಪುರವರಾಧೀಶ್ವರ ಸುವರ್ಣ್ನ*[3] ವ್ರಿಷಭ ಧ್ವ

೧೩. ಜ ಡಮ[ರುಕ*[4]] ತೂರ್ಯ್ಯ ನಿರ್ಗ್ಘೋ*[5]ಷಣ[ಂ] ಕದನ ಪ್ರಚಣ್ಡ ಮಾನ ಕನಕಾ[ಚ]ಳ ಸುಭಟರಾದಿತ್ಯ ಕಲಿಗಳಂಕುಸ ಸನಿವಾರ ಸಿದ್ಧಿ ಗಿರಿದುರ್ಗಮ್ಮಲ್ಲ

೧೪. ಚಲದಂಕರಾಮ ಕಳಚುರಿ ಕುಳಕಮಳ ಮಾರ್ತ್ತಂಡ ಪ್ರತಾಪ ಲಂಕೇಶ್ವರ ರಿಪು ಮದನ ಮಹೇಶ್ವರ ರಾಯಮುರಾರಿ ಭುಜಬ

೧೫. ಳಮಲ್ಲ ಶ್ರೀ ಸೋವಿದೇವರಸರು ಮೊದೆನೂರ ಕುಪ್ಪದೊಳು ಸುಖ ಸಂಕಥಾ ವಿನೋದದಿಂ ರ್ರಾಜ್ಯಂ ಗೆಯುತ್ತಮಿರೆ ॥ ತತು ಪಾದ ಯುಗಳ ಕಮಳ ಸ

೧೬. ಮುತು ಪ[ಂ]ನ್ನ [6]ಪರಾ[ಗ] ಮತ್ತ ಮಧುಕರ ನವನೀ ಭೃತು ಪರಿವೃಢ ಧೈರ್ಯ್ಯಂ ವಿಳಸತು ಪುಣ್ಯಂ ತೇಜಿರಾಜ ದಂಡಾಧೀಶಂ ॥ ಆ ಗುಣ

೧೭. ಸಿಧಿಯ ವಂಶವತಾರವೆಂತೆನೆ ॥ ದೊರೆವೆತ್ತ ನಂದವಾಟೀ ಪುರದೊಳು ಪೆಸರ್ವೆತ್ತ ದೇಶಿಕಸ್ವಾಮಿಯ [ಭಾ]ಸುರ ಕುಲದೊಳಗಸ್ತ್ಯಕುಲಾಭ

---

2 ಇಲ್ಲಿನ ಏತ್ವವು ಅಕ್ಷರದ ಮೇಲ್ಗಡೆ ಕೊಟ್ಟಿಲ್ಲ. ಬಹಳ ಹಿಂದಿನ ಕಾಲದ ಸಂಪ್ರದಾಯದಂತೆ ಅಕ್ಷರದ ಕೆಳಭಾಗದಲ್ಲಿ ಏತ್ವ ಸಂಕೇತದ ಕುರುಹು ಕಾಣಬರುತ್ತದೆ.

3 ತಾಲು ಣ ಅಕ್ಷರಕ್ಕೆ ಒತ್ತಕ್ಷರವನ್ನು ದಂತ್ಯದ ನ ವನ್ನೇ ಉಪಯೋಗಿಸುವುದು ಈ ಕಾಲದ ಶಾಸನ ಲೇಖಕರ ಆಚಾರ.

4 ಈ ಎರಡು ಅಕ್ಷರಗಳನ್ನು ಹಂಸಪಾದ ಹಾಕಿ ಪಾದದ ಕೆಳಗೆ ಸೇರಿಸಿದ್ದಾರೆ.

5 ವರ್ಗ ಪ್ರಥಮವನ್ನು ಪ್ರಧಾನಾಕ್ಷರವಾಗಿಯೂ ವರ್ಗ ದ್ವಿತೀಯವನ್ನು ಒತ್ತಕ್ಷರವಾಗಿಯೂ ಬಳಸಲಾಗಿದೆ.

6 ೧೧ನೆಯ ಪಂಕ್ತಿಯಲ್ಲಿ ದಂತ್ಯತಾಲವ್ಯ ರೂಪಗಳ ಪ್ರಯೋಗವನ್ನೂ ಈ ಪಂಕ್ತಿಯಲ್ಲಿ ಉಪಯೋಗಿಸಿರುವ ದಂತ್ಯ ನಕಾರದ ಒತ್ತಕ್ಷರವನ್ನೂ ಹೋಲಿಸಿ ನೋಡಬಹುದು.

೧೮. ರಣರೆನಿಪ್ಪೆಣ್ಬರೆಸೆದರುವ್ವೀ*[7]ದೇವರು ॥ ತದ್ವಂಶದೊಳೆಸೆದಂ ವಿಳಸದ್ವೃತ್ತಿಂ
ಕಾಳಿಮಯ್ಯ ನಾಯಕ ತನಯಂ ಸದ್ವಿ[ನ]ಯಂ ಧೈರ್ಯ ಮಹೀ
ಭೃದ್ವರ್ಯ

೧೯. ಬಮ್ಮದೇವ ನಾಯಕ ನನಘಂ ॥ ವರ ಗುಣನಿಧಿ ಹೊ[೦]ನರ ಬಮ್ಮರ
ಸಂಗಂ ಜಕ್ಕಣವ್ವೆಗಂ ಪುಟ್ಟಿದರಾದರದಿಂ ಕಾವಣ ದಂ

೨೦. ಡೇಶ್ವರಸುಂ ಪ್ರಭು ತೇಜಿರಾಜ ದಂಡಾಧಿಪನುಂ ॥ ಅವರೊಳಗೆ ಪ್ರವಿ
[ಪು]ಳ ವಿವೇಕದೊಳು ಬ್ರಹ್ಮ ವಿಭು ಸುತಂ ಬ್ರಹ್ಮಸೆನಿಪು

೨೧. ದುಚಿತಂ ಪುತ್ರೋ ಭವತಿ ಪಿತಾ ಸ್ವಯುವೆಂಬಾ[ದ್ಯ] ವಾಕ್ಯದಿಂ ತೇಜಿ
ರಾಜ ದಂಡಾಧಿಪನಂ ॥ ಈ ಧರೆ ಬಣ್ಣಿಕುಂ ಕಳಚುರಿ ಕ್ಷಿತಿಪಾಳಕ
ಸೋವಿದೇವ ಧಾತ್ರೀಧವ [ಮಂ]

೨೨. ತ್ರಿಯಂ ಬುಧ ಸಮಾಜಸರೋಜ ಸರೋಜಮಿತ್ರನಂ ಸಾಧಿತ ವೈರಿ
ಚಕ್ರನಸುದಾತ್ತ ಗುಣಾಂಬುಧಿ ತೇಜಿರಾಜ ದಂಡಾಧಿಪನಂ ಪರಾರ್ತ್ಥ

೨೩. ನಿಧಿಯುಂ ನುತ ಮೂರ್ತ್ತಿಯ ನುದ್ಘಕೀರ್ತ್ತಿಯುಂ ॥ ಕೈಯ್ಯಂ ಮುಗಿ
ದು[8]ರ್ವ್ವರೆ ಭಾಷ್ಯೈಯೆನೆ ನೃಪ ಮಂತ್ರಿ [ಲ. ಸ] ಮಣಿಮುಕುರಸ
ಕಾ

೨೪. ವೈಯ್ಯನ ಸಹಜಾತಂ ತೇಜಯ್ಯಂ ದಂಡಾಧಿನಾಥ ಮಂಡನನೆಸೆದಂ ॥
ವರಗುಣ ಭರಿತಂ ಪರಹಿತ ಚರಿತಂ ಬೆಳ್ವಲದ ನೆಗಳ್ದ ದಂಡಾಧೀ

೨೫. ಶಂ ಸರನಿಧಿ ಗಾಂಭೀರ್ಯ್ಯಂ ಗಿರಿವರ ಧೈರ್ಯ್ಯಂ ತೇಜರಾಜನೂರ್ಜ್ಜಿತ
ತೇಜಂ ॥ ಜನಕಂ ಶ್ರೀ ಬಮ್ಮಣಾರ್ಯ್ಯಂ ಜನನಿ ಜನನುತಾಚಾರೆ

೨೬. ಜಕ್ಕಯ್ಯೆಯಣ್ಣಂ ಮನುಮಾರ್ಗ್ಗಂ ಕಾಮದಂಡಾಧಿಪತಿ ಕಳಚುರಿ
ಕ್ಷ್ಮಾಧಿಪ ಸೋವಿದೇವಂ ಜನವಂದ್ಯ ಸ್ವಾಮಿ ದೈವಂ ಗಿರಿಪತಿ
ತನಯಾ

೨೭. ಧೀಶ್ವರ ಶಂಭು ಜನ್ಮಾವನಿಭಾಸ್ವಂ ನಂದವಾಟೀಪುರವೆನೆ ಧರೆಯೊಳು
ತೇಜಿರಾಜಂ ಕೃತಾರ್ಥಂ ॥ ಆ ನೆಗಳ್ದ ತೇಜಿರಾಜ ಚಮೂನಾಥ

೨೮. ಸ ವೈಯ್ಯನಂ ಚಮೂಪತಿ ತಿಳಕಂ ಶ್ರೀನಿಧಿ ವಿವೇಕನಿಧಿ ಮಹಿಮಾ
ನಿಧಿ ತೇಜಯ್ಯನ ಧನ ಬುಧ ನಿಧಿ ನೆಗಳ್ದಂ ॥ ಅಲ್ಲಿ ಪ್ರಧಾನ ಕರಣಂ
[ಗ]

೨೯. [ಳೆಂ] ತಪ್ಪವರೆನೆ ॥ ಕರಣ ಪಿತಾಮಹನಂ ಕಳಚುರಿ ಭೂಪಕುಳ
ಪ್ರಧಾನನಂ ದ್ವಿಜವಂಶಾಭರಣನನನುಪಮ ಮತಿಯುಂ ಧರೆ ಬೊಪ್ಪಣ
ನಾಯಕನ[ಲಂ]

---

7 ಪ್ರಧಾನಾಕ್ಷರವನ್ನು ಒತ್ತಕ್ಷರವನ್ನಾಗಿಯೂ ಒತ್ತಕ್ಷರವನ್ನು ಪ್ರಧಾನ ಅಕ್ಷರವಾಗಿಯೂ ಬಳಸಿರುವುದಕ್ಕೆ ಇದು ಉತ್ತಮ ಉದಾಹರಣೆ. ಈ ಕಾಲದ ಶಾಸನಗಳಲ್ಲಿ ಒತ್ತಕ್ಷರವನ್ನೇ ಪ್ರಧಾನ ವಕಾರವನ್ನಾಗಿ ವಿಶೇಷವಾಗಿ ಬಳಸುವ ರೂಢಿಯುಲ್ಲದೆ. ಈ ಶಾಸನದಲ್ಲೇ ನಾಲ್ಕಾರು ಉದಾಹರಣೆಗಳಿವೆ.

8 ೧೮ನೆಯ ಪಂಕ್ತಿಯ ವಕಾರದ ಮೇಲಿನ ಟೀಕೆಯನ್ನು ನೋಡಿ.

೩೦. [ಪಿಂ] ಪೊಗಳ್ಗುಂ ॥ ಭೂವಿನುತಂ ಶ್ರೀಕರಣದ [ವಾವ]ಣದೇವಂ ನಿಜಾಗ್ರಜಾತನೆನಲು ವಿದ್ಯಾ [ವಿ]ನಯ ಗುಣ ಸಮೃದ್ಧಿಯೊಳಾ[ವಂ] ಮಹದೇವ ನಾಯಕಂ

೩೧. [ಗೆ]ಣೆಯೆನಿಪಂ ॥ ನುತನಂ ಸಮಸ್ತಗುಣ ಸಂಯುತನಂ ಶ್ರೀ ಸೋವಿದೇವ ಭೂಪನ ಸಚಿವೋನ್ನತನಂ ಗುಣಿ[ಗೊಲ್ಲೊ]ಣ ಪಂಡಿತನಂ ಧರೆ ಪೊಗುಳ್ವುದಖಿಳ ವಿಬು

೩೨. ಧ ಸ್ತುತನಂ ॥ ಲೋಕಸ್ತು[ತ್ಯೌ]ದಾರ್ಯ್ಯಂ ಶ್ರೀ ಕರಣದ ಕಾಳಿಮಯ್ಯ ನಾಯಕನನುಜಂ [ರಾ]ಕೇ[ಂ]ದೂಜ್ಜ್ವಳಕೀರ್ತ್ತಿ ಶ್ರೀ ಕಾನ್ತಾಧಿಪತಿ ಸೊಗಯಿಪಂ

೩೩. ಮಧುವಯ್ಯಂ ॥ ಅನುಪಮ ರಾಯ ಮುರಾರಿಯ ಮನದಂನನೆನಿಪ್ಪ ಸಚಿವನಂ ನೆಗಳ್ದ ಪಸಾಯ್ತನ [ನೊ]ಸೆದು ಪಡಪವಳರೊಡೆಯನ ನೊಲವಿಂ ಬಂಮ್ಮಿ

೩೪. ದೇವನಂ ಧರೆ ಪೊಗಳ್ಗುಂ ॥ ಸ್ಥಳದ ಕರಣಂಗಳು ॥ ವಿನುತಗುಣಂ ಗುಣವಜ್ಜನ ಜನಕಂ ಗುಣಾತ್ಮನೆನಿ[ಪ್ಪೊ]ನೆ ಪೆಂಪಿನ ಕಣಿಯೆನೆ ನೆಗರ್ದ್ದಾದಿತ್ಯ ನಾ

೩೫. ಯಕ[ಂ] ನುದಾತ್ತ ರತ್ನ ನಾಯಕನೆಸೆದಂ ॥ ವರಸತ್ವಗುಣೋನ್ನತಿಯೊಳು ಪಿರಿ[ಯಂ] ಗೋವಿನ್ದದೇವನಿಂದೆನಿಸಿದುದೀದೊರೆತು

೩೬. ಮಧುಸೂದನ ಪ್ರಿಯ ಸಿರತನ ಮಹದೇವ ನಾಯಕನ [ಪು]ದಿದಜಸಂ ॥ ವಿನುತ ಚತುರ್ವ್ವಿಧ ಪಾಂಡಿತ್ಯನಿಧಿಯೆನಲ್ಪೆಂ

೩೭. ಪುವಡೆದ ಗೊಲ್ಲಣ ವಿಭುಗಂಗನುಕೂಳ ಮಂತ್ರಿ ನರಸಿಂಗ ನಾಯಕಂ ಶಿಷ್ಟತುಷ್ಟಿದಾಯಕನೆಸೆದಂ ॥ [ಹ]ರಪದ ಭಕ್ತಿಯುತಂ ಶಂಕ

೩೮. ರ ಪಾದಾಂಭೋಜ ಮತ್ತ ಭೃಂಗ್ಗಂ ಗಿರಿಜಾವರ ಪದ ಪೂಜಕನೆನೆ ದಾಸಿರಾಜನಂ ಧನ್ಯನೆಂದು ಪೊಗಳದರೊಳರೆ ॥ ವರಗುಣಿ ಧರಣೀದೇವೋತ್ಕ

೩೯. ರ ಚೂಡಾಮಣಿ ವಿಶಿಷ್ಟ ಚಿನ್ತಾಮಣಿ ಭಾಸುರತರ ತೇಜದ ಕಣಿಯೆನೆ ಧರೆ ಕರಣದ ನಾಚಿಮಯ್ಯ ನಾಯಕನೆಸೆದಂ ॥ ಧರೆ ಬೊಪ್ಪ

೪೦. ಣ ನಾಯಕನಿಂ ಪಿರಿಯನ ಗುಣಿ ಚಿದ್ದರಾಜ ವಿಭುವಿನ ಸುತನಂ ಕರಣಾಗ್ರಗಣ್ಯನಂ ನಾಚರಸನನಭಿವಿನುತ ಕೀರ್ತ್ತಿ ನಿಧಿಯಂ ಪೊಗಳ್ಗುಂ ॥ ಪ್ರಕಟಿ

೪೧. ತ ಕೀರ್ತ್ತಿಗಳು ಮಧುವ ಗೊಲ್ಲಣ ಪಂಡಿತ ಬಮ್ಮದೇವ ನಾಯಕ ಮಹಾದೇವ ನಾಯಕ ಜಗನ್ನುತ ಬೊಪ್ಪಣ ನಾಯಕರ್ ಗುಣಾಧಿಕ ಕರಣಂಗ

೪೨. ಳಗ್ಗದಧಿಕಾರಿ ಚಮೂಪತಿ ತೇಜಿರಾಜನೆಂಬ ಕುಟಿಲಚಿತ್ತರೊಂದಿದ ರಿದಾಶ್ರಿತ ಕೋಟಿಯ ಪುಣ್ಯಾವಾಗದೆ ॥ ಇನ್ತೆಸಿಸಿದ ಕರಣಂಗಳೊಡನೆ ಬರೆ ಬೆಳ್ವಲ

೪೩. ನಾಡಧಿಕಾರಿ ಶ್ರೀ ಕರಣಂ ಬಾಹತ್ತರ ನಿಯೋಗಾಧಿಪತಿ ಮಹಾ ಪ್ರಚಂಡ ದಂಡನಾಯಕಂ ತೇಜಿರಾಜಂ ನಿಜಾಧಿಕಾರದ ಮಹಾಗ್ರ ಹಾರಂ ಕುಕ್ಕ

೪೪. ನೂರ್ಗ್ಗೆ ಬಿಜಯಂ ಗೆಯ್ದು ಸಕನೃಪ ಕಾಲಾತೀತ ಸಂವತ್ಸರ ಶತಂ ಗಳು ೧೮೯೦ನೆಯ ವಿಕೃತ ಸಂವತ್ಸರದ ಕಾರ್ತ್ತಿಕ ಶುದ್ಧ ೧೨ ಶುಕ್ರವಾರ

೪೫. ಪುಣ್ಯಾದಿನದೊಳು ಆ ಕುಕ್ಕನೂರ ಶ್ರೀ ಸ್ವಯಂಭೂ ಪ್ರಸಂಸ ಮಲ್ಲಿಕಾರ್ಜ್ಜುನ ದೇವರ್ಗ್ಗೆ ಲಕ್ಷ್ಯಗದ್ದು [ಕೋ] ಪರಿಪೂರ್ಣ್ನನನ್ತರಂ ಗೋಕ್ಷೀರ ಸಹಸ್ರ

೪೬. ಗದ್ದುಕಾ ಪುರಸ್ಸರಂ ಮಹಾಪೂಜೆಯುಂ ಮಾಡಿ ಸಮನನ್ತರಂ ಕರ [ಣಾ]ನುಕೂಲ್ಯದಿಂ ಮುನ್ನಮೆ [ಕ]ಳಚುರಿ ಚ್ಚಕ್ರವರ್ತ್ತಿ ಭುಜಬಳ ಮಲ್ಲ

೪೭. ರಾಯ ಮುರಾರಿ ಶ್ರೀ ಸೋವಿದೇವರಸರ್ಗ್ಗೆ ಬಿಂನಪಂಗೆಯ್ದು ಸಕಾ ರುಣ್ಯಾ ದಾನವಾಗಿ ಪಡೆದು ॥ ಜಲಧಿಪ್ರಿತೋರ್ವ್ವರಿಯೊಳು ಬೆಳ್ವಲ ನಾಡೊ[ಳ್ಳು]

೪೮. ಕುಕ್ಕನೂರು ಮುವತ್ತ[ಱಕೊ[10]]ಳೆತ್ತಲು ವೊಪ್ಪುವ ಚೆಲ್ವಿಂ ಹಾಡಲಗೆ [ಱಕ್ಕೆ] ಧನಧಾನ್ಯ ಜನಸಮೃದ್ಧಿಯಿನೆಸೆಗುಂ ॥ ಎನಿಸಿದ ಹಾಡಲಗೆಱಿ [ಸಮು]

೪೯. ನೆನೆ ಭೂನುತ ಮಲ್ಲಿಕಾರ್ಜುನ ಪ್ರಭುಗಂ [ಪೆ]ಂಪಿಸ ವಿಪ್ರರ್ಕ್ಕಳ್ಗಂ ದಂಡನಾಯಕಂ ತೇಜಿರಾಜ ಬುಧನಿಧಿ ಕೊಟ್ಟ ॥ ಅನ್ತು

೫೦. ದೇವಂ ಭೂದೇವರ ಪಾದಪ್ರಕ್ಷಾಳನಂ ಗೆಯ್ದು ಧಾರಾಪೂರ್ವ್ವಕಂ ಸರ್ವ್ವ ಬಾಧಾಪರಿಹಾರಂ ಸರ್ವ್ವ ಸಮ

೫೧. ಸ್ಯ ಮಾಚಂದ್ರಾರ್ಕ್ಕಸ್ಥಾಯಿ ಶ್ರೀ ಸ್ವಯಂಭೂ ಪ್ರಸಂಸ ಮಲ್ಲಿ ಕಾರ್ಜುನ ದೇವಂ ಭೂದೇವೋಪಭೋಗ್ಯಯೋಗ್ಯವಾಗೆ ದಂಡ ನಾಯಕ

೫೨. ತೇಜಿರಾಜನುಂ ಕರಣಂಗಳುಂ ಬಿಟ್ಟರಾ ಹಳ್ಳಿಯ ಸೀಮಾ ಸಂಬಂಧಿ ॥ ಮೂಡಣ ಮೇರೆ ಮಂಗಳೂರ ಹೊಲವೆರೆಯೊಡವಿನ ಕೊತ್ತು

9 ಒತ್ತಕ್ಷರದ ವಕಾರ ಸಂಕೇತವನ್ನು ಪ್ರಧಾನ ವಕಾರವನ್ನಾಗಿ ಉಪಯೋಗಿಸಿರುವುದಕ್ಕೆ ಇದು ಒಳ್ಳೆಯ ಉದಾಹರಣೆ.

10 ಈ ಶಾಸನದಲ್ಲಿ ಶಕಟ ರೇಫವನ್ನು ಉಪಯೋಗಿಸುವುದಕ್ಕೆ ಇದೇ ಮೊದಲು.

೫೩. ರ ಹೊರೆಯಣ ಕವಿಲೆಯ ಕಲ್ । ಅಲ್ಲಿಂ ತೆಂಕಲು ಮಂಗಳೂರ ಹಿರಿಯೂರ ಹೊಲವೆರೆಯ ಕವಿಲೆಯ ಕಲ್ । ಅಲ್ಲಿಂ ತೆಂಕಲ್ ಮೂ[11]

೫೪. ಡಣ ತೆಂಕಣ ಗೋಟಿನ ಮೇರೆ ಸಿರಿನೂರ ಹೊಲವೆರೆ ಎರ್ಮ್ಮೆಗುಂಡಿನ ಮೂಡಣ ಮೆಯ್ಯ ಕವಿಲೆಯ ಕಲ್ । ಅಲ್ಲಿಂ ಪಡುವಲು ತೆಂಕಣ ಮೇರೆ ಸಿರಿಯೂರ

೫೫. ಹೊಲವೆರೆಯೊಡವಿನ ಕಾತುರ ಹೊರೆಯಣ ಕವಿಲೆಯ ಕಲು । ಅಲ್ಲಿಂ ಪಡುವಲು ಕುಸುವನ ಹಳ್ಳ[ದೊ]ವ್ವರಿವಿಡಿದ ಸಿ[ರಿ]ವೂರ ರತುವಗೆಯ್ಯ ಬೆದ

೫೬. ವಟ್ಟಿಯ ಹೊಲವೆರೆಯ ಹೊರೆಯಣ ಕವಿಲೆಯ ಕಲ್ । ಅಲ್ಲಿಂ ಪಡುವಲ್ ತೆಂಕಣ ಹಡುವಣ ಗೋಟಿನ ಮೇರೆ ಬೆದವಟ್ಟಿಯ ಹೊಲವೆರೆಯ ಆ ಕುಸುವನ ಹ

೫೭. ಳ್ಳದ ನೀರ್ವರಿಯ ಹೊರೆಯಣ ಕವಿಲೆಯ ಕಲ್ । ಅಲ್ಲಿಂ ಬಡಗಲ್ ಹಡುವಣ ಮೇರೆ । ಬೆದವಟ್ಟಿಯ ಪೊಲವೆರೆಯಾ ಕಾತರಿಕೆಯ ಮೆಳೆಯೊಳಗಣ ಕರಿಯ

೫೮. ಕಲ್ಲ ಹೊರೆಯ ಕವಿಲೆಯ ಕಲ್ । ಅಲ್ಲಿಂ ಬಡಗಲ್ ಹಡುವಣ ಬಡಗಣ ಗೋಟಿನ ಮೇರೆ । ಬೆದವಟ್ಟಿಯ ಹೊಲದ ಬಳ್ಳಂಗೆಱೆಯ ಗೊರವೊಂಬಲದ ಮುಗ್ಗುಡ್ಡೆಯ ಬ

೫೯. ಸ್ನಿಯ ಕೊತ್ತೂರ ಬಡಗಣ ಕವಿಲೆಯ ಕಲು । ಅಲ್ಲಿಂ ಮೂಡಲ್ ಬಡಗಣ ಮೇರೆ । ಆ ಗೊರವಂಬೊಲದ ರಾವಣಿಕೆಯ ಹೊಲವೆರೆಯ ಬಳಿಯ ಕಲ್ ಹೊರೆ

೬೦. ಯ[ಣ] ಕವಿಲೆಯ ಕಲು । ಅಲ್ಲಿಂ ಮೂಡಲ್ ಬಡಗಣ ಮೂಡಣ ಗೋಟಿನ ಮೇರೆ । ರಾವಣಿಕೆಯ ಮಂಗಳೂರ ಹೊಲವೆರೆಯ ಕಾರೆಯ ಕೊತ್ತೂರ [ಹೊರೆ]

೬೧. ಯಣ ಕವಿಲೆಯ ಕಲ್ । ಈ ಸೀಮೆಯಿಂದೊಳಗಣ ಭೂಮಿ ನಿಧಿ ನಿಧಾನ ಸಿಕ್ಷೇಪ ಸಹಿತಂ ಶ್ರೀ ಸ್ವಯಂಭೂ ಪ್ರಸಂನ ಮಲ್ಲಿಕಾರ್ಜ್ಜುನ ದೇವರ್ಗ್ಗೊಂದು ಭೋಗ ದೇವರ ಬ್ರ

೬೨. ಹ್ಮಪುರಿಗಳಪ್ಪ ಭೂದೇವರ್ಗೊಂದು ಭಾಗವಾಗಿ ಸಲ್ವುದಲ್ಲಿ ದೇವರ ಭಾಗದಿಂದಾದರ್ಥಂ ದೇವರಂಗಭೋಗಕ್ಕಂ ರಂಗಭೋಗಕ್ಕಂ ಸಲ್ವುದುಳಿದೊಂದು ಭಾಗದ ಭೂಮಿಯೊ

೬೩. ಳಗೆ ಪಸನ್ನ ಮಾಧವ ದೇವರ್ಗ್ಗೆ ಮತ್ತರ್ ೧೦ ಸುಳಿಯ ಉಳಿದ ಭೂಮಿಯುಂ ತೆಂಗಿನ ಮಾಧವ ದೇವರು । ಕಳಸವಳ್ಳಿಯ ನಾರಾಯಣ ಭಟ್ಟೋಪಾಧ್ಯಾಯರ್ ಸಾ

11 ಮಕಾರದ ಒತ್ತಕ್ಷರವು ಇಲ್ಲಿ ಪ್ರಧಾನ ಮಕಾರವಾಗಿ ಉಪಯೋಗಿಸಲಾಗಿದೆ.

೬೪. ವಿರದ ಸೋಮೇಶ್ವರದ ಭಟ್ಟೋಪಾಧ್ಯಾಯರ್ । ಕಾಳಿದಾಸ ಭಟ್ಟ ದೀಕ್ಷಿತರ್ । ವೇದಾನ್ತದ ಸೋಮೇಶ್ವರ ಭಟ್ಟೋಪಾಧ್ಯಾಯರ್ ಪುರಷೋತ್ತಮ ಭಟ್ಟ ಸೋ[ಮ]ಯಾಜಿಯ

೬೫. ರು ಮಹದೇವ ಭಟ್ಟೋ[ಪಾ]ಧ್ಯಾಯರ್ । ಚಂದ್ರ ಸೋಮಯಾಜಿ ಯರು । ಚೌನ್ಡ ಭಟ್ಟೋಪಾಧ್ಯಾಯರು ಬೌಧಾಯನ ಚೌನ್ಡಯ ಕ್ರಪಿತರು । ನಾರಸಿಂ

೬೬. ಹ ಭಟ್ಟೋಪಾಧ್ಯಾಯರ । ನಾರಾಯಣ ಘಳಿಶಾ[ಸ]ರು । ಹಿ[ಟ್ಟಿ]ಯ ಭಟ್ಟೋಪಾಧ್ಯಾಯ[ರು] । ಪಟ್ಟವರ್ಧನ ಆದಿತ್ಯ ಘಳಿಶಾಸರು । ಕೇಶವ ಭಟ್ಟೋಪಾಧ್ಯಾ

೬೭. [ಯ]ರು । ಸ್ವಾಮಿ ಕುಮಾರ ಭಟ್ಟರು । ಹರಿಹರ ಭಟ್ಟರು । ಗೋವಿಂದ ಭಟ್ಟರು । ಬೆಣ್ಣೆಯ ಮಾಧವ ಭಟ್ಟರು । ಯೋಗೇಶ್ವರ ಭಟ್ಟೋಪಾ ಧ್ಯಾಯರು । ಚೌಂಣ್ಡೋ

೬೮. [ಜಾ]ತಾಗ್ನಿಗ[ಳ್] । ಶಂಕರ ಘಳಿಶಾಸರು । ಸೋಮೇಶ್ವರ ಘಳಿಶಾ ಸರು । ವಿಶ್ವೇಶ್ವರ ಘಳಿಶಾಸರು । ಶ್ರೀಧರ ಭಟ್ಟರು । ನಾರಾಯಣ ಷಡಂಗಿಯರು

೬೯. [ಶಿ]ವ ದೇವರು ಗೋವಿಂದ ದೇವರು । ಕೇಶವ ಘಳಿಸಾಸರು । ಇನ್ತಿವರ್ ಸಮಾನಾಂಶವಾಗೆ ಹಚ್ಚುಕೊಟ್ಟರು । ಆ ದೇವರ ಮೇಲಾರ್ಯೆಯ್ಕೆ

೭೦. [ಯಂ] ದೇವರ ಬ್ರಹ್ಮಪುರಗಳಾರಯ್ವರು ॥ ಸ್ಥಿರಮತಿ ತೇಜಿರಾಜ ಪೃತ ವೇಶ ಸಗಸ್ತ್ಯ ವಿಭೂಷಣಂ ಗುಣಾಕರ ನೊಸೆದಿತ್ತ ವೃತ್ತಿಯಿದು ಸೂರ್ಯ್ಯ

೭೧. [ಸು]ಧಾಂಶು ಸುರಾದ್ರಿ ರಾಜಭಾಸುರ ಸುರಕೋಟಿ [ನಿಲ್ವೆನಗಂ] ಧರೆಯೊಳ್ ಶಿವ ವಿಶ್ರುತೋಪ್ಪ್ರರಾಮರ ನಿವಹೋಪಭಾಗ್ಯವೆನೆ ನಿಲ್ಕೆ ಜನ ಸ್ತುತ ವಿ

೭೨. ನ್ತಿದೆಂಬಿನಂ ॥ ಪ್ರಿಯದಿಂದಿನ್ತಿದ ಸೆಯ್ದಿ ಕಾವ ಪುರುಷಂಗಾಯುಂ ಮಹಾಶ್ರೀಯುಮಕ್ಕೆ ಇದಂ ಕಾಯದ. . ಪಾಪಿಗೆ ಕುರುಕ್ಷೇತ್ರೋ ರ್ವ್ವಿಯೊ

೭೩. [12][ಳ್ವಾ]ರಣಾಸಿಯೊಳೇಳ್ಕೋಟಿ ಮುನೀಂದ್ರರಂ ಕವಿಲೆಯಂ ವೇದಾ ಢ್ಯರಂ ಕೊನ್ದುದೊಂದಯಶಂ ಸಾಗ್ಗುಗಿದೆನ್ದು ಸಾಱಿದಪುದೀ ಶಿ[ಳಾ]ಕ್ಷರಂ ಧಾತ್ರಿ

12 ಇಲ್ಲಿ ಒಂದು ಸಾಲು ಇದ್ದು, ''ಗಳಿಗೆಯ ಶಂಕರ ಘಳಿಸಾಸಿರು । ಪುರುಷೋತ್ತಮ ಘಳಿಸಾಸಿರು'' ಎಂದು – ಹಿಂದೆ ಹೆಸರುಗಳನ್ನು ಹೇಳುವಾಗ – ಮರೆತವುಗಳನ್ನು ಹಿಂದುಗಡೆ ಕೆತ್ತಿದಂತೆ ಕಾಣುತ್ತದೆ.

೭೪. ಯೊಳು ॥ ಅಲ್ಲಿ....ಶ್ರೀ ಸ್ವಯಂಭೂ ಪ್ರಸನ್ನ ಮಲ್ಲಿಕಾರ್ಜ್ಜುನ ದೇವರ ಭೂಮಿಯೊಳಗೆ ತುಪ್ಪದ ಚಂಡೆಯ ನಾಯಕಂಗೆ ದೇವರ್ಗ್ಗೆ ಬಿ

೭೫. ಸಕೆಯ್ದುಣ್ಬ ಪಡಿಯ[ಱ]ಕೆಯ ಕೆಯಿಮತ್ತರು......ಪಲಬರ್ ಪೊಗಳಲಗಸ್ತ್ಯರ ಕುಳತಿಳಕಂ ನೆಗಳ್ದ ಸುಕವಿ ಪರಮಾ

೭೬. ..ಸುತಂ ನಲವಿಂ ಪೇಳ್ದಂ ಸಜ್ಜನ ತಿಲಕನೆನಲು ಮೆಚ್ಚನಾವನೀ ಶಾಸನಮಂ। ವರ ಕಾಶ್ಯಪ ಗೋತ್ರದ ದೇವರಾಜನಂಗನೆ

೭೭. ಯ ಮಾಳಿಯಕ್ಕನ ತನಯಂ ಬ[ರೆ]ದನಿದಂ ಶ್ರೀ ನಗೆವಡೆಯರ ತಿಲಕಂ ಗಣಕ ಮಂಡನಂ ಶಿವದೇವ ॥ ಸ್ವಸ್ತಿ ಶ್ರೀಮನ್ಮಹಾ

೭೮. ಗ್ರಹಾರ ಕುಕ್ಕನೂರು ಸಾಸಿರ್ವ್ವರ ವರಪುತ್ರ ನಚ್ಚಿನ ಕ[ಮ್ಮ]ಟ ದೊಡೆಯಂ ಚನ್ನೋಜನ ಮಗಂ ಡಾವೋಜಂ ಬಿಸಕೆಯ್ದು ಬರೆದ ಶಾಸನಮಂ ॥

## ಶಾಸನದ ಹಿನ್ನುಡಿ

ಕೊಪ್ಪಳ ಜಿಲ್ಹೆಯಲ್ಲಿ 'ಕುಕನೂರು' ಎಂಬುದೊಂದು ಗ್ರಾಮ; ಇದು ಸದರ್ನ ಮರಾಠಾ ರಯಿಲ್ವೇಯ ಹುಬ್ಬಳ್ಳಿ–ಗುಂತಕಲ್ಲ ಮಾರ್ಗದಲ್ಲಿರುವ 'ಬನ್ನಿಕೊಪ್ಪ' ಎಂಬ ಸ್ಟೇಶನ್ನಿನ ಉತ್ತರಕ್ಕೆ ಆರು ಮೈಲಿನಲ್ಲಿದೆ. ಈ ಊರಲ್ಲಿ ಸಾಹಿತ್ಯಾಂಗಣದ ತಾರೆಗಳಂತಿರುವ ಅವೆಷ್ಟೋ ಶಾಸನಗಳಿದ್ದರೂ ಇದೊಂದರ ಹೊರತು ಯಾವ ಶಾಸನವೂ ಕವಿನಾಮ ಕೀರ್ತನೆಯ ಗೆಯ್ದಿಲ್ಲ. ಇದರಲ್ಲಿಯಾದರೋ

ಪಲಬರ್ ಪೊಗಳಲಗಸ್ತ್ಯರ
ಕುಲತಿಲಕಂ ನೆಗಳ್ದಸುಕವಿ ಪರಮಾ. . ಸುತಂ
ಸಲಪಿಂ ಪೇಳ್ದಂ ಸಜ್ಜನ
ತಿಲಕನೆಸಲು ಮೆಚ್ಚನಾವನೀ ಶಾಸನಮಂ ॥

ವರ ಕಾಶ್ಯಪ ಗೋತ್ರದ ದೇ
ವರಾಜಸಂಗನೆಯ ಮಾಳಿಯಕ್ಕನ ತನಯಂ
**ಬರೆದನಿದಂ** ಶ್ರೀನಗೆವಡೆ
ಯರ ತಿಲಕಂ ಗಣಕಮಂಡನಂ **ಶಿವದೇವ** ॥

ಎಂದು ಇದೆ. ಇಲ್ಲಿಯೊಂದು ಸಂದೇಹ. ಮೊದಲಿನ ಪದ್ಯದಲ್ಲಿ—'ಅಗಸ್ತ್ಯರ ಕುಲ ತಿಲಕಂ ಸಲಪಿಂ ಪೇಳ್ದಂ' ಎಂದಿದೆ; ಎರಡನೆಯ ಪದ್ಯದಲ್ಲಿ—'ಕಾಶ್ಯಪ ಗೋತ್ರದ ದೇವರಾಜನ ಪತ್ನಿಯಾದ ಮಾಳಿಯಕ್ಕನ ತನಯನೂ ಶ್ರೀನಗೆವಡೆಯರ (?) ಕುಲ ತಿಲಕನೂ ಗಣಕ ಮಂಡನನೂ ಆದ ಶಿವದೇವನು ಇದನ್ನು ಬರೆದನು' ಎಂದು ಹೇಳಿದೆ. ಮೊದಲಿನ ಪದ್ಯದಲ್ಲಿ 'ಪೇಳ್ದಂ' ಎಂದಿದ್ದು ಶಾಸನ ಕರ್ತೃವಿನ ಹೆಸರಿಲ್ಲ. ಕೆಳಗಣ ಪದ್ಯದಲ್ಲಿ 'ಬರೆದನು' ಎಂದಿದ್ದು ಅಂಕಿತವಿದೆ. ಮೇಲಿನ ಪದ್ಯದಲ್ಲಿಯ 'ಅಗಸ್ತ್ಯರ ಕುಲ' ಎಂದರೆ ಅಗಸ್ತ್ಯ ಗೋತ್ರವೇ? ಹೀಗಾದ ಪಕ್ಷದಲ್ಲಿ ಕೆಳಗಣ ಪದ್ಯವು ಕಾಶ್ಯಪ ಗೋತ್ರದ ಶಿವದೇವನನ್ನು ಕೀರ್ತಿಸುತ್ತಿದೆ; ಮೇಲಾಗಿ 'ಬರೆದನು' ಎಂದೂ ಉಸುರುತ್ತಿದೆ; ಹೀಗಾಗಿ ಶಾಸನ ಕರ್ತೃವು **ಶಿವದೇವ**ನಾಗಲಿಕ್ಕಿಲ್ಲವೇ? ಬರೆದನು ಎಂದರೆ ಹೇಳಿದ್ದನ್ನು ಬರೆದವನು ಎಂದೇ ಗ್ರಹಿಸಬೇಕೇ? ಆದರೆ ಶಾಸನ ಕೆತ್ತಿಸಿದವನ ಹೆಸರು ಎರಡನೆಯ ಪದ್ಯದ ಮುಂದೆ

"ಸ್ವಸ್ತಿ ಶ್ರೀಮನ್ಮಹಾಗ್ರಹಾರ ಕುಕ್ಕನೂರು ಸಾಸಿರ್ವರ ವರಪುತ್ರ ನಚ್ಚಿನಕ[ಪ್ಪ] ಟದೊಡೆಯಂ ಚನ್ನೋಜನ ಮಗಂ ಡಾಮೋಜಂ ಬೆಸಕೆಯ್ದು ಬರೆದ ಶಾಸನಮಂ"

ಎಂದಿರುವುದರಿಂದ ಮೇಲಿನ ಪದ್ಯದಲ್ಲಿಯ [13]ಅಗಸ್ತ್ಯ ಕುಲವು ಗೋತ್ರವಾಗಿರದೆ

---

13 ಅಗಸ್ತ್ಯಕುಲದ ಪರಮಾ. . ಸುತನು ಕವಿತೆ ಹೇಳಿ ಶಿವದೇವನಿಂದ ಕಲ್ಲಿನ ಮೇಲೆ ಬಣ್ಣದ ಬಳಪದಿಂದ ಬರೆಯಿಸಿರಬಹುದು. ಡಾಮೋಜನು ಆ ಅಕ್ಷರಗಳ ರೇಖೆಯನ್ನು ಹಿಡಿದು ಕಣ್ಡರಿಸಿರಬಹುದು. ಈ ಮೂರು ಕರ್ಮಗಳನ್ನೂ ಬೇರೆ ಬೇರೆಯಾಗಿ ಬೇರೆ ಬೇರೆ ಜನರು ನಿರ್ವಹಿಸಿದ ಉದಾಹರಣೆಗಳಿವೆ. (ಶಿ.ತಾ.ಶ.)

ಅಗಸ್ತ್ಯ ಕುಲದ ಕಾಶ್ಯಪ ಗೋತ್ರದ ಶಿವದೇವನೇ ಕವಿಯಾಗಿರಬಹುದು. ಹೀಗಾದ ಪಕ್ಷದಲ್ಲಿ, ೧೨ನೆಯ ಶತಮಾನದ ಒಬ್ಬ ಶಾಸನ ಕವಿಯ ನಾಮವು ಉಪಲಬ್ಧವಾದಂತಾಗಲಿಲ್ಲವೇ?[14]

ಈ ಶಾಸನಸ್ಥ ದಾತೃವಿನ ಕುಲವೂ ಅಗಸ್ತ್ಯ ಕುಲವು, ಕವಿಯದೂ ಅಗಸ್ತ್ಯ ಕುಲವು. ಒಂದೇ ಮನೆತನದಲ್ಲಿ ಕವಿಯೂ ದಾತೃವೂ ಇದ್ದಾರೆ.

ಈ ಶಾಸನವು ಆ ಊರ 'ಬ್ರಹ್ಮಪುರಿ'ಯ ಮಧ್ಯದಲ್ಲಿರುವ 'ಮಹಾಮಾಯಾ' ದೇವಸ್ಥಾನದ ಉತ್ತರಕ್ಕೆ ಅನತಿದೂರದಲ್ಲಿರುವ ಮಲ್ಲಿಕಾರ್ಜುನ ಮಂದಿರದಲ್ಲಿ ಗರ್ಭಾಗಾರದ ಬಾಗಿಲಿನ ಬಲಕ್ಕಿದೆ. ಇದೇ ದ್ವಾರದ ಎಡಕ್ಕೆ ಇನ್ನೆರಡು ಶಾಸನಗಳೂ ಉಂಟು.[15]

ಶಾಸನದ ಭಾಷೆಯೂ ಬಂಧವೂ ಅಂತಹ ಪ್ರೌಢವಾದುದೇನೂ ಅಲ್ಲ; ಸರಳವಾಗಿದೆ. ಶಾಸನ ಕೆತ್ತುವವನಿಂದ, 'ವ್ರಿಷಭ,' 'ವ್ರಿಥ,' 'ವ್ರಿತ,' 'ನ್ರಿಪ' ಮೊದಲಾದುವು ಕೆಲವು ಗ್ರಾಮ್ಯರೂಪಗಳಾಗಿವೆ. ಶಾಸನದಲ್ಲಿ ೨೩ ಕಂದಪದ್ಯಗಳು, ೩ ಚಂಪಕ ಮಾಲೆಗಳು, ೩ ಮತ್ತೇಭ, ೧ ಉತ್ಪಲಮಾಲೆ, ೧ ಸ್ರಗ್ಧರಾ—ಹೀಗೆ ಒಟ್ಟು ೩೦ ಪದ್ಯಗಳಿದ್ದು, ಮೇಲೆರಡು ಸಂಸ್ಕೃತ ಅನುಷ್ಟುಪ್‌ಗಳಿವೆ.

ಈಗ ಈ ದೇವಸಿಗೆ 'ಹಾಲೇಶ್ವರ' ಎಂದು ಅಲ್ಲಿಯ ಜನರು ಕರೆಯುತ್ತಾರೆ. ತೇಜಿರಾಜನು ಗೋಕ್ಷೀರ ಸಹಸ್ರ [16]ಗಡ್ಡುಕಾ ಪುರಸ್ಸರವಾಗಿ ಮಹಾಪೂಜೆಯ ಮಾಡಿದಂದಿನಿಂದ ಈ ಹೆಸರು ಬಂದಿದೆಯೋ ಏನೋ!

ಶಾಸನದಲ್ಲಿ ದಾನವಾಗಿ ಬರುವ 'ಹಾಡಲಗೆಱೆ'ಯು ಈಗ ಉಪಲಬ್ಧವಿದ್ದಂತಿಲ್ಲ. ಸೀಮಾಂತರಗಳಾಗಿ ಉಲ್ಲಿಖಿತಗಳಾದ 'ಮಂಗಳೂರು,' 'ಬೆದವಟ್ಟಿ,' 'ಕಾತರಿಕೆ,' 'ರ್‍ಯಾವಣಿಕೆ' ಮೊದಲಾದ ಆಗಿನ ಕುಕ್ಕನೂರ್ ಮೂವತ್ತರೊಳಗಣ ಊರುಗಳು ಈಗಲೂ ಉತ್ತಮ ಸ್ಥಿತಿಯಲ್ಲಿವೆ. ಕಳಚುರಿ ವಂಶದವರನ್ನಿಲ್ಲಿ, 'ಕಾಳಾಂಜರ ಪುರವರಾಧೀಶ್ವರ' ಎಂದು ಸಿರ್ದೇಶಿಸಿದೆ; ಆದರೀ 'ಕಾಳಾಂಜರ' ಪುರವಾವುದೋ? ಈ ಶಾಸನ ಕಾಲದಲ್ಲಿ ಸೋಮಿದೇವನ ನೆಲೆವೀಡಾದ 'ಮೂದೆಗನೂರ ಕುಪ್ಪ'ವು ಮಾತ್ರ ಕೊಪ್ಪಳದಿಂದ ನೇರವಾಗಿ ಉತ್ತರಕ್ಕೆ ೫ ಮೈಲಿನಲ್ಲಿದೆ. ಅದಕ್ಕೀಗ 'ಮಾದಿನೂರು' ಎಂದು ಹೆಸರು.

ಈ ಮಾದಿನೂರು ಬಿಜ್ಜಳ ಹಾಗೂ ಅವನ ನಾಲ್ವರು ಮಕ್ಕಳಿಗೂ ನೆಲೆವೀಡಾಗಿದ್ದಂತೆ[17] ಕುಕನೂರಲ್ಲಿರುವ ಅನ್ಯ ಶಾಸನಗಳಿಂದಲೂ, ಕೌಲೂರ ಮೊದಲಾದ ಇತರ ಅಪ್ರಕಾಶಿತ ಶಾಸನಗಳಿಂದಲೂ ತಿಳಿಯಬರುತ್ತದೆ. ಇದಲ್ಲದೆ ಮಾದಿನೂರಲ್ಲಿರುವ

---

14 ಈ ಕವಿಯ ಹೆಸರು ಕವಿಚರಿತೆಯ ಮೂರೂ ಸಂಪುಟಗಳಲ್ಲಿಲ್ಲ.

15 ಈ ಶಾಸನಗಳ ವಿಷಯ ಮತ್ತೊಮ್ಮೆ ಬರೆಯಬೇಕೆಂದಿರುವೆವು.

16 'ಗಡ್ಡುಕಾ' ಅಂದರೆ ಗಡಿಗೆ ಎಂದರ್ಥ. 'ಗಡ್ಡುಕ' ಅಂದರೆ ಸುವರ್ಣ ಕುಂಭ ಎಂಬ ಅರ್ಥವಿದೆ. ಆದಕಾರಣ ಲೇಖಕನು ಉದ್ದೇಶಪೂರ್ವಕವಾಗಿ ಈ ಶಬ್ದ ಪ್ರಯೋಗಮಾಡಿ 'ಸುವರ್ಣ ಕುಂಭ' ವೆಂಬ ಧ್ವನಿ ಬರುವಂತೆ ಮಾಡಿದ್ದಾನೆ. (ತಿ.ತಾ.ಶ.)

17 E. C. XI, Chitaldrug 76 and XII, Shikarpur 97.

ತೈಲಪನದೊಂದು ಶಾಸನದಿಂದಲೂ ಇದು ಅವನ ನೆಲೆವೀಡಾಗಿದ್ದಂತೆ ಒಬ್ಬರು ಅನುಮಾನಿಸುತ್ತಾರೆ.[18] ಆಗಿನ ಕಾಲದಲ್ಲಿ ಇದನ್ನು 'ಮೊದೆಗನೂರ ಕುಪ್ಪ', 'ಮೊದೆಗನೂರ ಕುಪ್ಪಡೆ,' 'ಮೊದೆಗನೂರು,' 'ಮೊದೆಯನೂರು,' 'ಮೊಱೆಯನೂರು,' 'ಮೊಱೆಗನೂರು,' ಸಂಸ್ಕೃತದಲ್ಲಿ 'ಮೋದಿತಗ್ರಾಮ' ಎಂದು ಮುಂತಾಗಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ತೆರನಾಗಿ ಕರೆದಿದ್ದಾರೆ. ಪ್ರಕೃತ ಶಾಸನದಲ್ಲಿಯ 'ಮೊದೆಗನೂರ ಕುಪ್ಪ'ದ ವಿಷಯ ವಿಚಾರದಲ್ಲಿ ಡಾ|| ಫ್ಲೀಟರೂ, 'ಅದು ನಿಜಾಮ ರಾಜ್ಯದಲ್ಲಿರಬೇಕೆ'ಂದು ಊಹಿಸಿದ್ದಾರೆ.[19] ಕ್ರಿ.ಶ. ೧೯೨೯ನೇ ಮೈಸೂರ ಪ್ರಾಕ್ತನ ಸಂಶೋಧಕ ಶಾಖೆಯ ವರದಿ(Report)ಯಲ್ಲಿಯ ಚಾಳುಕ್ಯ ಜಗದೇಕಮಲ್ಲದೇವನ (ಶ. ವ. ೯೪೭ ಕ್ರಿ.ವ. ೧೦೨೫) ಕಾಲದ ೬೫ನೆಯ ನಂಬರಿನ ಶಾಸನದಲ್ಲಿ

"....ಚಾಳುಕ್ಯಾಭರಣ ಶ್ರೀಮಜ್ಜಗದೇಕಮಲ್ಲ ದೇವರ್ ಮೊಱೆಗನೂರ ನೆಲೆವೀಡಿನೊಳ್ ರಾಜ್ಯಂಗೆಯ್ಯುತ್ತಮಿರ್ದು.."

ಎಂದು ಹೇಳಿದೆ. ಆದರೆ ಅಲ್ಲಿ ಈ ಮೊಱೆಗನೂರ ವಿಷಯ ವಿಚಾರವಾಗಿ[20]: "As for the King's residence Moleganur, it is not known where the village was" ಎಂದು ಡಾ|| ಎಂ. ಎಚ್. ಕೃಷ್ಣರವರು ಬರೆದಿದ್ದಾರೆ. ಇಲ್ಲಿಯ 'ಮೊಱೆಗನೂರೂ' ಪ್ರಕೃತ ಶಾಸನಸ್ಥ 'ಮೊದೆಗನೂರಕುಪ್ಪ'ವೂ ಒಂದೇ ಆಗಿರಲಿಕ್ಕಿಲ್ಲವೆ!

ಈ ಶಾಸನ ಕಾಲದಲ್ಲಿಯಾಗಲೇ ಅನುಸ್ವಾರವನ್ನು ಅಕ್ಷರಗಳ ಮೇಲೆ ಕೊಡುವ ರೂಢಿಯು ಮುಸುಳಿಸಹತ್ತಿರಬೇಕು. ಇಲ್ಲಿ ಕೆಲವು ಕಡೆ ಅಕ್ಷರಗಳ ಮೇಲೆಯೂ (ಉದಾ:—ಸಾಲು ೬೧, ಸೀಮ್ನೆಯಿಂ; ೭೦, ಆರ್ಯೈಸ್ಕೆಯಂ; ೭೧, ಸುಧಾಂಶು; ಇತ್ಯಾದಿ.) ಕೆಲವು ಕಡೆ ಅಕ್ಷರಗಳ ಮುಂದೆಯೂ (ಉದಾ:—೭೨, ಪ್ರಿಯದಿಂ; ಕವಿತೆಯಂ ೭೩, ೬೨, ಭಾಗದಿಂಧ, ಇತ್ಯಾದಿ) ಉಪಯೋಗಿಸಲ್ಪಟ್ಟಿದೆ. ಇದೇ ತೆರನಾಗಿ ಕೆಲಸಲ ಮೇಲೂ, ಕೆಲಸಲ ಕೆಳಗೂ ಉಪಯೋಗಿಸಲ್ಪಟ್ಟಿದೆ. ಱಕಾರ ಮತ್ತು ೞಕಾರಗಳದೂ ಇದೇ ತೆರನಾಗಿದೆ. ೞಕಾರವಂತೂ ಇಲ್ಲವೇ ಇಲ್ಲ. ಱಕಾರವು ಕೆಲಕಡೆ ಮಾತ್ರ ಉಪಯೋಗಿಸಿದೆ. ಉದಾ:—ಸಾಲು ೫, 'ಭೂಪರದಱೊಳೆ'; ೪೮, ಮುವತ್ತಱೊಳೆತ್ತಲು ಹಾಡಲಗೆಱೆ ಚಳ್ಳಂಗೆಱೆ ಮುಂತಾದುವುಗಳಲ್ಲಿ. ಆದರೆ ೫೯, ೬೦, ಕೊತ್ತುರ, ಕೆರೆ ಮೊದಲಾದೆಡೆಗಳಲ್ಲಿ ರೇಫವೇ ಉಪಯೋಗಿಸಲ್ಪಟ್ಟಿದೆ. ಇದರಿಂದ ಈ ಶಾಸನಕಾಲದಲ್ಲಿ ೞಕಾರವಂತೂ ಲೋಪವಾಗಿತ್ತು, ಱಕಾರವು ಕೊಂಚವಾಗಿ ಬಳಕೆಯಲ್ಲಿದ್ದಿತಾದರೂ ಮುಸುಳಿಸಹತ್ತಿತ್ತು ಎಂದಾಗುತ್ತದೆ.

ಬಾಹತ್ತರನಿಯೋಗಾಧಿಪತಿ; ಎಪ್ಪತ್ತೆರ ಕಿಸುವೊಳಲೊಂದು ಮಾತ್ರ ಇದೆ. ಆದರೆ ಈ ಬಾಹತ್ತರ (೭೨)ದು ಯಾವ ನಾಡೋ?

18 ಪ್ರಾಚೀನ ಕರ್ನಾಟಕ, ಸಂಪುಟ ೧, ಸಂಚಿಕೆ ೨, ಪುಟ ೧೮ ನೋಡಿ.

19 Fleet's Kan. Dyn. p. 487, An. 4, p. 485.

20 ಮೈಸೂರ ಆರ್ಕಿಯೋಲಾಜಿಕಲ್ ರಿಪೋರ್ಟು, ೧೯೨೯, ಪುಟ ೧೪೦.

ಈ ಕೆಳಗಣ ಶಬ್ದಗಳಿಗೆ ಅರ್ಥವೇನೋ?

ಹೊಲವೆರೆಯೊಡವಿನ (೫೨), ಹೊಲವೆರೆಎಮ್ಮೆ೯ (೫೪), ಕಾತುರಹೊರೆ (೫೫), ಚಳ್ಳಂಗೆಱಿ³ (೫೮), ತಪ್ಪವರೆನೆ (೨೯).

ಈಗಣ ಬಂಗಾಲದವರ ಹೆಸರುಗಳಂತೆ: ಸೋಮೇಶ್ವರ ಭಟ್ಟೋಪಾಧ್ಯಾಯ, ಮಹದೇವ ಭಟ್ಟೋಪಾಧ್ಯಾಯ ಮುಂತಾಗಿ ಇಲ್ಲಿಯೂ ಹೆಸರುಗಳಿವೆ. ಭಟ್ಟೋಪಾಧ್ಯಾಯರು ಚಟ್ಟೋಪಾಧ್ಯಾಯರಾಗಿರಬಹುದೆ?

ಪಟ್ಟವರ್ಧನ ಆದಿತ್ಯ ಘಳಿಸಾಸಿರು ಎಂಬ ಹೆಸರು, ಮರಾಠಾ ಪಟವರ್ಧನರನ್ನು ಜ್ಞಾಪಿಸುವಂತಿದೆ.

ಈ ಶಾಸನದ ಕಾಲವನ್ನು '೧೦೯೦ನೆಯ ವಿಕೃತಿ ಸಂವತ್ಸರದ ಕಾರ್ತ್ತಿಕ ಶುದ್ಧ ೧೨ ಶುಕ್ರವಾರ' ಎಂದು ಹೇಳಿದೆ. ಆದರೆ ನಮಗಿಲ್ಲಿ ಸಿಕ್ಕಿರುವ ಕೆಲವು ಅನ್ಯ ಶಾಸನಗಳಲ್ಲಿ ಹೇಳಿರುವ ವತ್ಸರಗಳೊಡನೆ ಇದನ್ನು ಎಣಿಸಿ ನೋಡಲು ೧೦೯೦ನೆಯ ವತ್ಸರವು ವಿಕೃತಿಯಾಗಲಿಲ್ಲ. ಆಗ ಸಂಶಯಿಸಿ ಮಂಜೇಶ್ವರದ ಶ್ರೀಮಾನ್ ಗೋವಿಂದ ಪೈಗಳವರನ್ನು ಕೇಳಿಕೊಳ್ಳಲು, ಅವರು: " ಶಕ ವರ್ಷ ೧೦೯೦ ಎಂದಿಗೂ ವಿಕೃತಿ ಸಂ॥ ಆಗಲಾರದು. ಬರವಣಿಗನ ಕೈತಪ್ಪಿನಿಂದ ಈ ಸಂಖ್ಯೆ ಹೀಗೆ ಕೆತ್ತಲ್ಪಟ್ಟಿರಬಹುದೇನೊ? ಇದು ಶ. ವ. ೧೦೯೨ ಎಂದಾಗಬೇಕು. ಹಾಗಾದರೆ ಈ ತೇದಿ ಕ್ರಿ.ವ. ೧೧೭೦ನೆಯ ಅಕ್ಟೋಬರ ೨೩ನೆಯ ತಾರೀಖು ಶುಕ್ರವಾರ ಎಂದಾಗುತ್ತದೆ" ಎಂದು ತಿಳುಹಿಸಿದರು. ಈ ಮೂಲಕ ಅವರಿಗೆ ವಂದನೆಗಳು.

ನಾ. ಭಾ.

---